

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಡಾ॥ ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1386

ಉತ್ತರಿಸಬೇಕಾದ ದಿನಾಂಕ : 09.03.2022.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಶುಸಂಗೋಪನೆ ಇಲಾಖೆ ಅಧೀನದಲ್ಲಿ ಬರುವ ಸಾರ್ವಜನಿಕ ಉದ್ದಿಮೆಗಳು, ನಿಗಮ / ಕಂಪನಿಗಳು ಶಾಸನಬದ್ಧ ಮಂಡಳಿಗಳು / ಅಂಗ ಸಂಸ್ಥೆಗಳು ಮತ್ತು ಸೊಸೈಟಿಗಳ ಸಂಖ್ಯೆ ಎಷ್ಟು; ಅವು ಯಾವುವು; (ಇಲಾಖೆವಾರು, ಕೇಂದ್ರ ಕಛೇರಿ ವಿಳಾಸ ಹಾಗೂ ದೂರವಾಣಿ ಸಂಖ್ಯೆಗಳನ್ನು ಒಳಗೊಂಡಂತೆ ವಿವರವಾದ ಮಾಹಿತಿ ಒದಗಿಸುವುದು) | ಪಶುಸಂಗೋಪನೆ ಇಲಾಖೆ ಅಧೀನದಲ್ಲಿ ಬರುವ ಸಾರ್ವಜನಿಕ ನಿಗಮಗಳು / ಕಂಪನಿಗಳು ಶಾಸನಬದ್ಧ ಮಂಡಳಿಗಳು / ಉದ್ದಿಮೆಗಳು / ಅಂಗ ಸಂಸ್ಥೆಗಳ ಸಂಖ್ಯೆ: 07<br><br>1) ಕರ್ನಾಟಕ ಸಹಕಾರ ಕುರಿ ಮತ್ತು ಮೇಕೆ ಸಾಕಾಣಿಕೆದಾರರ ಸಂಘಗಳ ಮಹಾಮಂಡಳ ನಿಯಮಿತ, ಕರ್ನಾಟಕ ಸ್ಟೇಟ್ ಆಗ್ರೋ ಕಾರ್ನ್ ಪ್ರೈವೇಟ್ ಲಿಮಿಟೆಡ್‌ನ ಕಟ್ಟಡ, ಬಳ್ಳಾರಿ ರಸ್ತೆ, ಹೆಬ್ಬಾಳ, ಬೆಂಗಳೂರು-560024.<br>ದೂರವಾಣಿ ಸಂಖ್ಯೆ:080-29731030/29731075<br>ಇ-ಮೇಲ್ : kcsgf2016@yahoo.com<br>ಇದರ ಅಡಿಯಲ್ಲಿ 345 ಸದಸ್ಯ ಸಂಘಗಳಿರುತ್ತವೆ.<br><br>2) ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ, ಕುರಿಭವನ, ಹೆಬ್ಬಾಳ, ಬೆಂಗಳೂರು-560024<br>ದೂರವಾಣಿ: 23414295, 23413294<br>ಇ-ಮೇಲ್: kswdcl@gmail.com<br>ಇದರ ಅಡಿಯಲ್ಲಿ 664 ಸಹಕಾರ ಸಂಘಗಳು ಸಂಯೋಜನೆಗೊಂಡಿರುತ್ತವೆ.<br><br>3) ಕರ್ನಾಟಕ ಸಹಕಾರ ಕುಕ್ಕುಟ ಮಹಾಮಂಡಳಿ ನಿ., ಕೇಂದ್ರ ಕಛೇರಿ, ಪಶುಪಾಲನಾ ಭವನದ ಹಿಂಭಾಗ, ಬೆಂಗಳೂರು-560024<br>ದೂರವಾಣಿ ಸಂಖ್ಯೆ : 080-29902415<br>ಇ-ಮೇಲ್ ಐಡಿ:mdkcpfbangalore@gmail.com<br>ಇದರ ಅಡಿಯಲ್ಲಿ ಒಟ್ಟು 199 ಪ್ರಾಥಮಿಕ ಕೋಳಿ ಸಾಕಾಣಿಕ ಸಂಘಗಳು ಸದಸ್ಯತ್ವವನ್ನು ಹೊಂದಿರುತ್ತವೆ. |

| | | |
|---|---|---|
| | | 4) ಕರ್ನಾಟಕ ಸಹಕಾರ ಹಾಲು ಉತ್ಪಾದಕರ ಮಹಾ ಮಂಡಳಿ ನಿಯಮಿತ, ಡಾ:ಎಂ.ಹೆಚ್. ಮರಿಗೌಡ ರಸ್ತೆ, ಅಂಚೆ ಸಂಖ್ಯೆ 2915 ಬೆಂಗಳೂರು.<br>ದೂರವಾಣಿ ಸಂಖ್ಯೆ 080-26096800, 25536625<br>ಇ-ಮೇಲ್: ahykmf@yahoo.com<br>ಇದರ ಅಡಿಯಲ್ಲಿ ಒಟ್ಟು 14914 ಹಾಲು ಉತ್ಪಾದಕರ ಸಹಕಾರ ಸಂಘಗಳು ಸದಸ್ಯತ್ವವನ್ನು ಹೊಂದಿರುತ್ತವೆ.<br><br>5) ಕರ್ನಾಟಕ ಪ್ರಾಣಿ ಕಲ್ಯಾಣ ಮಂಡಳಿ, ಪಶುಪಾಲನ ಭವನ, ಹಿಂಭಾಗ, ಹೆಬ್ಬಾಳ, ಬೆಂಗಳೂರು-24.<br>ದೂರವಾಣಿ ಸಂಖ್ಯೆ:080-29901411<br>ಇ-ಮೇಲ್-kawb2021@gmail.com<br><br>6) ಕರ್ನಾಟಕ ಜಾನುವಾರು ಅಭಿವೃದ್ಧಿ ಸಂಸ್ಥೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವೆಗಳು, ಪಶುಪಾಲನಾ ಭವನ, ಹೆಬ್ಬಾಳ, ಬೆಂಗಳೂರು-24.<br>ದೂರವಾಣಿ ಸಂಖ್ಯೆ:080-29533854<br>ಇ-ಮೇಲ್-pdkldabanglore@gmail.com<br><br>7) ಕರ್ನಾಟಕ ಪಶುವೈದ್ಯಕೀಯ ಪರಿಷತ್ತು ಹೆಬ್ಬಾಳ ಬೆಂಗಳೂರು-560024.<br>ದೂರವಾಣಿ ಸಂಖ್ಯೆ:080- 23516740/29735133<br>ಇ-ಮೇಲ್ - kvc.bangalore@gmail.com |
| ಆ | ಸದರಿ ಇಲಾಖೆಯಡಿ ಹಾಲಿ ಜಾರಿಯಲ್ಲಿರುವ ಯೋಜನೆಗಳಾವುವು; (ಯೋಜನೆವಾರು ವಿವರವಾದ ಮಾಹಿತಿ ನೀಡುವುದು) | ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಡಿ ಹಾಲಿ ಜಾರಿಯಲ್ಲಿರುವ ಯೋಜನೆಗಳನ್ನು **ಅನುಬಂಧ-1 ರಲ್ಲಿ** ನೀಡಲಾಗಿದೆ. |
| ಇ | ಪಶುಸಂಗೋಪನೆ ಇಲಾಖೆ ಅಧೀನದಲ್ಲಿ ಎಷ್ಟು ನಿಧಿಗಳು ಇವೆ; ಇದ್ದಲ್ಲಿ, ಖರ್ಚು ಮಾಡಲು ಇರುವ ಮಾರ್ಗಸೂಚಿಗಳಾವುವು; ಇಲ್ಲಿಯವರೆಗೆ ಎಷ್ಟು ಹಣ ಖರ್ಚು ಮಾಡಲಾಗಿದೆ ಹಾಗೂ ಉಳಿದಿರುವ ಹಣವೆಷ್ಟು; | ಯಾವುದು ಇರುವುದಿಲ್ಲ. |

ಈ | ಕಳೆದ 3 ವರ್ಷಗಳಿಂದ ಭಾರತ ಸರ್ಕಾರವು ಸದರಿ ಇಲಾಖೆಗೆ ನೀಡುತ್ತಿರುವ ಸಹಾಯಧನ/ಪ್ರೋತ್ಸಾಹ ಧನ ಎಷ್ಟು? (ವಿವರವಾದ ಮಾಹಿತಿ ನೀಡುವುದು)

ಕಳೆದ 3 ವರ್ಷಗಳಿಂದ ಭಾರತ ಸರ್ಕಾರ ನೀಡುತ್ತಿರುವ ಸಹಾಯಧನ / ಪ್ರೋತ್ಸಾಹ ಧನದ ವಿವರ

**(ರೂ. ಲಕ್ಷಗಳಲ್ಲಿ)**

| **ಯೋಜನೆಗಳು** | **2019-20** | **2020-21** | **2021-22** |
|---|---|---|---|
| ಮೈತ್ರಿ ಕಾರ್ಯಕರ್ತರ ಸ್ಥಾಪನೆ | – | – | 101.25 |
| ರಾಷ್ಟ್ರೀಯ ಕೃತಕ ಗರ್ಭಧಾರಣೆ ಕಾರ್ಯಕ್ರಮ | 756.47 | – | 1154.81 |
| ಏನ್.ಎ.ಎಫ್.ಸಿ.ಸಿ. | 499.80 | 231.01 | – |
| ರಾಷ್ಟ್ರೀಯ ಜಾನುವಾರು ಮಿಷನ್ | 1089.234 | – | 970.49 |
| ಆಸ್ಕಾಡ್ ಕಾರ್ಯಕ್ರಮ | 1685.03 | 2688.19 | 413.71 |
| ಪಿ.ಪಿ.ಆರ್.ಸಿ.ಪಿ | 213.6 | 185.11 | 308.52 |
| ಎನ್.ಎ.ಡಿ.ಸಿ.ಪಿ | 1943.44 | 4250.59 | 3073.9 |
| ಆಟೋಮ್ಯಾಟಿಕ್ ಮಿಲ್ಕ್ ಕಲೆಕ್ಷನ್ ಯುನಿಟ್ (ಎ.ಎಂ.ಸಿ.ಯು ಅಳವಡಿಕೆ) | 1906.50 | –. | – |
| ರಾಜ್ಯ ಕೇಂದ್ರಿಯ ಪ್ರಯೋಗಾಲಯ | 2245.00 | | – |
| ಬಲ್ಕ್ ಮಿಲ್ಕ್ ಕೂಲರ್ (ಬಿ.ಎಂ.ಸಿ) | – | – | **2092.00 (ಶೇಕಡ 50 ರ ಅನುದಾನ)** |
| ಡಿ.ಎ.ಡಿ.ಎಫ್ ಸಾಲದ ಮೇಲಿನ ಬಡ್ಡಿ ದರದಲ್ಲಿ ರಿಯಾಯಿತಿ | – | – | 473.42 |

**ಪಸಂಮೀ ಇ-64 ಸಲೆವಿ 2022**

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಸಚಿವರು

# ಅನುಬಂಧ-1

| ಕ್ರ ಸಂ | ಕಾರ್ಯಕ್ರಮ | ವಿವರ |
|---|---|---|
| 1 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರ ಅನ್ವಯ ಬಳಕೆಯಾಗದ ಮೊತ್ತ | • ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಫಲಾನುಭವಿಗಳಿಗೆ ಹಾಲು ಕರೆಯುವ ಯಂತ್ರ ಮತ್ತು ಹಸುಗಳ ನೆಲಹಾಸು ಇವುಗಳನ್ನು ಶೇ.90 ರ ಸಹಾಯಧನದೊಂದಿಗೆ ವಿತರಿಸಲಾಗುವುದು. |
| 2. | ಲಸಿಕಾ ಕಾರ್ಯಕ್ರಮ | • ಗುರುತಿಸಲ್ಪಟ್ಟ ಸಾಂಕ್ರಾಮಿಕ ರೋಗಗಳ ವಿರುದ್ಧ ಲಸಿಕೆ ಹಾಕುವುದು.<br>• ಕಾಲುಬಾಯಿ ಜ್ವರ ಮತ್ತು ಕಂದು ರೋಗಗಳ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ ಶೇ. 100 ಕೇಂದ್ರದ ಅನುದಾನ<br>• ಆಸ್ಕಾಡ್ ಯೋಜನೆಯಡಿಯಲ್ಲಿ ಶೇ. 60 ಕೇಂದ್ರದ ಪಾಲು ಹಾಗೂ ಶೇ. 40 ರಾಜ್ಯದ ಪಾಲು ಅನುಪಾತದಲ್ಲಿ ಅನುದಾನ (ಗಳಲೇ ರೋಗ, ಚಪ್ಪೆರೋಗ, ಕರುಳುಬೇನೆ, ನೆರಡಿ ರೋಗಗಳ ವಿರುದ್ಧ ಲಸಿಕೆ ಹಾಕುವುದು.)<br>• ಪಿ.ಪಿ.ಆರ್ ರೋಗದ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ ಶೇ. 60 ಕೇಂದ್ರದ ಪಾಲು ಹಾಗೂ ಶೇ. 40 ರಾಜ್ಯದ ಪಾಲು ಅನುಪಾತದಲ್ಲಿ ಅನುದಾನ |
| 3 | ಪಿಂಜರಾಪೋಲ್ ಮತ್ತು ಇತರೆ ಗೋಶಾಲೆಗಳಿಗೆ ಬೆಂಬಲ | • ಪಿಂಜರಾಪೋಲ್ ಹಾಗೂ ಇತರೆ ಗೋಶಾಲೆಗಳಲ್ಲಿರುವ ಪ್ರಾಣಿಗಳ ನಿರ್ವಹಣೆ,<br>• ಪ್ರತಿ ಜಿಲ್ಲೆಗೆ ಒಂದರಂತೆ ಗೋಶಾಲೆ ನಿರ್ವಹಣೆ. |
| 4 | ಕರ್ನಾಟಕ ಕುರಿ ಮತ್ತು ಕುರಿ ಉಣ್ಣೆ ಅಭಿವೃದ್ದಿ ನಿಗಮ ನಿಯಮಿತ: | • ನಿಗಮದಲ್ಲಿ ನೊಂದಣಿಯಾಗಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಪರಿಶಿಷ್ಟ ಪಂಗಡದ ಸದಸ್ಯರುಗಳಿಗೆ 6+1 ಕುರಿ / ಮೇಕೆ ಘಟಕ ವಿತರಿಸುವುದು,<br>• ವಲಸೆ ಕುರಿಗಾಗರಿಗೆ ಸಂಚಾರಿ ಟೆಂಟ್, ಸೋಲಾರ್ ಟಾರ್ಚ್, ರಬ್ಬರ್ ಪ್ಲೋರ್ ಮ್ಯಾಟ್ ಮತ್ತು ರೇನ್ ಕೋಟ್ ಸೇರಿದಂತೆ ಪರಿಕರಗಳ ಕಿಟ್‌ಗಳ ವಿತರಣೆ ಮಾಡಲಾಗುವುದು.<br>• ಕುರಿಗಾರರಿಗೆ ವೈಜ್ಞಾನಿಕ ಕುರಿ ಸಾಕಾಣಿಕೆಯಲ್ಲಿ ತರಬೇತಿ ನೀಡಲಾಗುವುದು. |
| 5 | ರಾಷ್ಟ್ರೀಯ ಜಾನುವಾರು ಮಿಷನ್ (ಕೇಂದ್ರ ಪುರಸ್ಕೃತ ಯೋಜನೆ): | • ಸಮಗ್ರ ಕುಕ್ಕುಟ ಅಭಿವೃದ್ಧಿ, ಹಿತ್ತಲ ಕುರಿ/ಮೇಕೆ, ಹಂದಿ ಅಭಿವೃದ್ಧಿ ಯೋಜನೆ<br>• ವಿಪತ್ತು ನಿರ್ವಹಣೆ-ಜಾನುವಾರು ವಿಮಾ ಯೋಜನೆ,<br>• ಜಾನುವಾರುಗಳ ಆಕಸ್ಮಿಕ ಮರಣಕ್ಕೆ ಪರಿಹಾರ ಧನ |
| 6 | ಹಾಲು ಉತ್ಪಾದಕರಿಗೆ ಉತ್ತೇಜನ: | • ಹಾಲು ಉತ್ಪಾದನೆಗೆ ಉತ್ತೇಜನ ನೀಡಲು ಕರ್ನಾಟಕ ಹಾಲು ಮಹಾಮಂಡಳಿಗೆ ಹಾಲು ಸರಬರಾಜು ಮಾಡುವ ಸದಸ್ಯರಿಗೆ ಪ್ರತಿ ಲೀಟರ್‌ಗೆ ರೂ.5/- ರಂತೆ ಪ್ರೋತ್ಸಾಹ ಧನ ನೀಡಲಾಗುವುದು. |

| | | |
|---|---|---|
| 7 | ವಿಸ್ತರಣಾ ಘಟಕಗಳ ಬಲಪಡಿಸುವಿಕೆ: | • ಮಿಶ್ರತಳಿ ಕರುಗಳ/ ಜಾನುವಾರು ಪ್ರದರ್ಶನ, ಹಾಲು ಕರೆಯುವ ಸ್ಪರ್ಧೆ, ಪ್ರಾಣಿ ಜನ್ಯ ರೋಗಗಳ ಜಾಗೃತಿ ಶಿಬಿರ ರೈತರ ತರಬೇತಿ ಮತ್ತು ಪ್ರವಾಸ, ಜಿಲ್ಲಾ ಮಟ್ಟದ ಪಶುಮೇಳ, ಜಾನುವಾರು ಜಾತ್ರೆ, ತಾಂತ್ರಿಕ ಸಂಕೀರಣ, |
| 8 | ಜಾನುವಾರುಗಳ ಆರೋಗ್ಯ ಶಿಬಿರ | • ಉಚಿತ ಜಾನುವಾರು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸುವ ಮೂಲಕ ಜಾನುವಾರುಗಳ ಆರೋಗ್ಯ ತಪಾಸಣೆ ಮಾಡಲಾಗುತ್ತಿದೆ. |
| 9 | ಪಶುಭಾಗ್ಯ ಯೋಜನೆ | • ಆರ್.ಕೆ.ವಿ.ವೈ, ಮತ್ತು ಹಾಲು ಉತ್ಪಾದಕರಿಗೆ ಉತ್ತೇಜನ ಕಾರ್ಯಕ್ರಮಗಳಲ್ಲಿ ಬಳಕೆಯಾಗದೆ ಉಳಿದ ಅನುದಾನದಲ್ಲಿ ಕೃಷಿ ಕಾರ್ಮಿಕರು, ವಿಧವೆಯರು, ದೇವದಾಸಿಯರು, ನಿರ್ಗತಿಕ ಮಹಿಳೆಯರಿಗೆ ಸ್ವಾವಲಂಬಿ ಜೀವನವನ್ನು ನಡೆಸಲು ಹೈನು ಘಟಕ, ಕುರಿ/ಮೇಕೆ ಘಟಕ ಮತ್ತು ಹಂದಿ ಘಟಕ ಸ್ಥಾಪನೆ ಮಾಡಲು ಸಹಾಯಧನ ನೀಡಲಾಗುತ್ತಿದೆ. |
| 10 | ಪಶು ಸಂಜೀವಿನಿ | • ಪಶುಪಾಲಕರ ಮನೆಯ ಬಾಗಿಲಲ್ಲಿ ರೋಗಗ್ರಸ್ಥ ಜಾನುವಾರುಗಳಿಗೆ ವಿಶೇಷ ತುರ್ತು ಚಿಕಿತ್ಸೆ ನೀಡಲು 15 ಜಿಲ್ಲೆಗಳಲ್ಲಿ "ಸುಸಜ್ಜಿತ ಪಶುಚಿಕಿತ್ಸಾ ವಾಹನ" ಗಳನ್ನು ಒದಗಿಸಲಾಗಿದೆ. |
| 11 | ಅಮೃತ ಸಿರಿ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಹೆಣ್ಣು ಕರುಗಳನ್ನು/ ಕಡಸುಗಳನ್ನು/ ಹಸುಗಳನ್ನು ಪುಸ್ತಕ ಬೆಲೆಯ ಶೇಕಡ 25 ರಂತೆ ಜಿಲ್ಲೆಯ ರೈತರಿಗೆ, ದೇವದಾಸಿಯರಿಗೆ, ವಿಧವೆಯರಿಗೆ, ಶವ ಸಂಸ್ಕಾರ ಕಾರ್ಮಿಕರಿಗೆ ವಿತರಣೆ ಮಾಡಲಾಗುವುದು. |
| 12 | ಅಮೃತ ಧಾರೆ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಗಂಡು ಕರುಗಳನ್ನು/ ಬೀಜದ ಹೋರಿಗಳನ್ನು ಇಲಾಖೆ ನಿಗದಿಪಡಿಸಿದ ಮಾರಾಟದ ಬೆಲೆಯಂತೆ ರೈತರಿಗೆ, ವಿತರಣೆ ಮಾಡಲಾಗುವುದು. |
| 13 | ಸಮಗ್ರ ಗೋಸಂಕುಲ ಸಮೃದ್ಧಿ ಯೋಜನೆ | • ಗಿರ್, ಸಾಹಿವಾಲ್, ಥಾರ್ ಪಾರ್ಕರ್, ಓಂಗೋಲ್, ದೇವಣಿ ತಳಿಗಳ ಮಾತೃ ಕೇಂದ್ರವನ್ನು ಸ್ಥಾಪಿಸುವುದು. |
| 14 | ಪ್ರಾಣಿಕಲ್ಯಾಣ ಸಹಾಯವಾಣಿ | • ಜಾನುವಾರುಗಳಿಗೆ 24/7 ನಿರಂತರ ಸೇವೆಯನ್ನು ಒದಗಿಸಲು ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ರೈತರು ಸಹಾಯವಾಣಿಯನ್ನು ಪ್ರಾರಂಭಿಸಲಾಗಿದ್ದು ಸಹಾಯವಾಣಿ ಸಂಖ್ಯೆ: 8277100200 ಮೂಲಕ ಸಂಪರ್ಕಿಸಿ ಇಲಾಖೆಯ ತಾಂತ್ರಿಕ ಸೇವೆಯನ್ನು ಪಡೆಯಬಹುದಾಗಿದೆ. |
| 15 | ಕೃತಕ ಗರ್ಭಧಾರಣೆ | • ರಾಜ್ಯದಲ್ಲಿರುವ ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಕೃತಕ ಗರ್ಭಧಾರಣೆ ಮಾಡಲಾಗುತ್ತಿದೆ. |